# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 641

2) ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

3) ಉತ್ತರಿಸುವ ದಿನಾಂಕ : 14-12-2020

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್ ಸಮಯದಲ್ಲಿ ರಾಜ್ಯದ ಸಂರಕ್ಷಿತ ಅರಣ್ಯ ಮತ್ತು ಅಭಯಾರಣ್ಯಗಳ ವನ್ಯಜೀವಿಗಳ ಸಂಖ್ಯೆ ಏರಿಕೆಯಾಗಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಕಾಲಕಾಲಕ್ಕೆ ಆನೆ ಮತ್ತು ಹುಲಿ ಗಣತಿ ಕಾರ್ಯವನ್ನು ಕೈಗೊಳ್ಳಲಾಗುತ್ತಿದ್ದು, 2017ರ ಆನೆ ಗಣತಿ ಪ್ರಕಾರ 6049 ಆನೆಗಳು ಇರುವುದಾಗಿ ಅಂದಾಜಿಸಲಾಗಿದೆ ಹಾಗೂ 2018 ರಲ್ಲಿ ಹುಲಿ ಗಣತಿ ಪ್ರಕಾರ 524 ಹುಲಿಗಳಿರುವುದಾಗಿ ಅಂದಾಜಿಸಲಾಗಿರುತ್ತದೆ.<br><br>ಪ್ರಸಕ್ತ ಸಾಲಿನ ಕೋವಿಡ್ ಸಮಯದಲ್ಲಿ ಯಾವುದೇ ಗಣತಿಕಾರ್ಯ ಕೈಗೊಂಡಿರುವುದಿಲ್ಲ. |
| ಆ) | ತುಮಕೂರು ಜಿಲ್ಲೆಯ ಮಧುಗಿರಿ ಸಮೀಪದ ಹಾಗೂ ಹಾವೇರಿಯ ಕೃಷ್ಣಮೃಗ ಸಂರಕ್ಷಿತ ಅರಣ್ಯ ನಿರ್ವಹಣೆ ಕಳಪೆಯಾಗಿದೆ ಎನ್ನುವ ದೂರುಗಳು ಸರ್ಕಾರದ ಗಮನಕ್ಕೆ ಬಂದಿವೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | ಈ ಕುರಿತು ಯಾವುದೇ ದೂರುಗಳು ಸ್ವೀಕೃತವಾಗಿರುವುದಿಲ್ಲ. |
| ಇ) | ಕಪ್ಪತಗುಡ್ಡದ ಸ್ವಾಭಾವಿಕ ರಕ್ಷಿತ ಅರಣ್ಯ ಗಣಿಗಾರಿಕೆಯ ಭೀತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಪ್ಪತಗುಡ್ಡ ಸಂರಕ್ಷಣೆಗೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ: 202/1995ರ ಬಗ್ಗೆ ಮಾನ್ಯ ನ್ಯಾಯಾಲಯವು ದಿನಾಂಕ: 04.08.2006ರಂದು ನೀಡಿರುವ ಆದೇಶದನ್ವಯ ರಾಷ್ಟ್ರೀಯ ಉದ್ಯಾನವನ /ವನ್ಯಜೀವಿಧಾಮದಿಂದ ಒಂದು ಕಿ.ಮೀ ವ್ಯಾಪ್ತಿಯಲ್ಲಿ ಗಣಿಗಾರಿಕೆಯನ್ನು ನಡೆಸುವುದು ನಿಷೇಧಿತ ಚಟುವಟಿಕೆಯಾಗಿರುತ್ತದೆ. ಕಪ್ಪತ್ತಗುಡ್ಡ ಅರಣ್ಯ ಪ್ರದೇಶದ ಸಂರಕ್ಷಣೆಗಾಗಿ ಸರ್ಕಾರವು ದಿನಾಂಕ: 16.05.2019ರಂದು "ವನ್ಯಜೀವಿಧಾಮ" ವೆಂದು ಘೋಷಿಸಿರುವುದರಿಂದ ಗಣಿಗಾರಿಕೆ ನಡೆಸಲು ಅವಕಾಶವಿರುವುದಿಲ್ಲ. |

| | | |
|---|---|---|
| ಈ) | ಅಳಿವಿನಂಚಿನಲ್ಲಿರುವ ಸಿಂಹಬಾಲದ ಕೋತಿ ಮತ್ತು ಹಾರ್ನ್‌ಬಿಲ್ ಪಕ್ಷಿ ಸಹಜ ನೆಲೆಯ ರಕ್ಷಣೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಹೊನ್ನಾವರ ವಿಭಾಗದಲ್ಲಿ ಗೇರಸೊಪ್ಪಾ ಹಾಗೂ ಶಿವಮೊಗ್ಗ ಜಿಲ್ಲೆಯ ಶರಾವತಿ ತೀರದಲ್ಲಿ ಸಿಂಗಳೀಕಗಳ (ಸಿಂಹಬಾಲದ ಕೋತಿ) ಸಂತತಿ ಇದ್ದು, ಇವುಗಳ ಸಂರಕ್ಷಣೆಗಾಗಿ 930.16 ಚ.ಕಿ.ಮೀ. ಪ್ರದೇಶವನ್ನು "ಶರಾವತಿ ಕಣಿವೆ ಸಿಂಗಳೀಕ ಅಭಯಾರಣ್ಯ" ಎಂದು ಸರ್ಕಾರದ ಆದೇಶ ಸಂಖ್ಯೆ:ಎಫ್‌ಇಇ 12 ಎಫ್‌ಡಬ್ಲ್ಯೂಎಲ್ 2019, ದಿನಾಂಕಃ 07.06.2019ರಂದು ಘೋಷಣೆಯಾಗಿರುತ್ತದೆ. ಸಿಂಗಳೀಕಗಳ ಸಂರಕ್ಷಣೆಗಾಗಿ ಕಳ್ಳಬೇಟೆ ತಡೆ ಶಿಬಿರಗಳ ನಿರ್ಮಾಣ, Canopy Bridge ನಿರ್ಮಾಣ, ಸ್ಥಳೀಯವಾಗಿ ಬೆಳೆಯುವ ಹಣ್ಣು ಬಿಡುವ ಪ್ರಭೇದಗಳನ್ನು ಉತ್ತೇಜಿಸುವುದು ಹಾಗೂ ಹಳ್ಳಕ್ಕೆ ನೀರು ಶೇಖರಣೆಗೆ ಚೆಕ್‌ಡ್ಯಾಂ ಇತ್ಯಾದಿ ಆವಾಸಸ್ಥಾನ ಅಭಿವೃದ್ಧಿ ಕೆಲಸಗಳನ್ನು ಕೈಗೊಳ್ಳಲಾಗಿದೆ.<br><br>ಹಳಿಯಾಳ ವಿಭಾಗದಲ್ಲಿ ಹಾರ್ನ್‌ಬಿಲ್ ಪಕ್ಷಿಯ ಸಂರಕ್ಷಣೆಗಾಗಿ ವಿರ್ನೋಲಿ ಮತ್ತು ದಾಂಡೇಲಿ ವಲಯಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: FEE 157 FWL 2009, ದಿನಾಂಕ: 31-5-2011ರ ಪ್ರಕಾರ 52.5 ಚ.ಕಿ.ಮೀ. ಪ್ರದೇಶವನ್ನು "ಹಾರ್ನ್‌ಬಿಲ್ ಪಕ್ಷಿ ಸಂರಕ್ಷಿತ ಪ್ರದೇಶ" ಎಂದು ಘೋಷಣೆ ಮಾಡಲಾಗಿದೆ. ಸದರಿ ಪ್ರದೇಶದಲ್ಲಿ ಹಾರ್ನ್‌ಬಿಲ್ ಪಕ್ಷಿಗಳು ತಿನ್ನುವಂತಹ ವಿವಿಧ ಜಾತಿಯ ಹಣ್ಣು ಬಿಡುವ ಪ್ರಭೇದಗಳನ್ನು ಉತ್ತೇಜಿಸುವುದು. ಅಲ್ಲದೆ, ಹಾರ್ನ್‌ಬಿಲ್ ಪಕ್ಷಿಗಳ ಬಗ್ಗೆ ಸಾರ್ವಜನಿಕರು / ಪ್ರವಾಸಿಗರಿಗೆ ಅರಿವು ಮೂಡಿಸಲು ಪ್ರತಿ ವರ್ಷ ಹಾರ್ನ್‌ಬಿಲ್ ಹಕ್ಕಿಹಬ್ಬವನ್ನು ಆಚರಿಸಲಾಗುತ್ತಿದೆ. |
| ಉ) | ಅರಣ್ಯ ಇಲಾಖೆಯಲ್ಲಿ ಬಾಕಿ ಉಳಿದ ನೇಮಕಾತಿ ಪ್ರಕ್ರಿಯೆ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗಿದೆಯೇ? (ಮಾಹಿತಿ ನೀಡುವುದು) | ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಆಇ 03 ಬಿಇಎಂ 2020 ದಿನಾಂಕ:06.07.2020ರಲ್ಲಿ ರಾಜ್ಯದಲ್ಲಿ ಕೋವಿಡ್-19 ನಿಂದ ಉಂಟಾದ ಪರಿಸ್ಥಿತಿಯನ್ನು ನಿಭಾಯಿಸಿ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸಲು ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸಬೇಕಾಗಿರುವುದರಿಂದ 2020-21ನೇ ಸಾಲಿನ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ತಡೆಹಿಡಿಯಲಾಗಿದ್ದು, ಆರ್ಥಿಕ ಇಲಾಖೆಯು ಸದರಿ ಸುತ್ತೋಲೆಯನ್ನು ಹಿಂಪಡೆದು ನೇಮಕಾತಿ ಪ್ರಕ್ರಿಯೆಗಳನ್ನು ಮುಂದುವರೆಸಲು ಅನುಮೋದನೆ ನೀಡಿದ ನಂತರ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ವಹಿಸಲಾಗುವುದು. |

**ಸಂಖ್ಯೆ: ಅಪಜೀ 220 ಎಫ್‌ಡಬ್ಲ್ಯೂಎಲ್ 2020**

**(ಆನಂದ್ ಸಿಂಗ್)**
**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು**